


# ಸಜೀವ ಸಮಾಧಿ

ಸಿಕ್ ಜನರ ನಾಯಕ ಗುರುಗೋವಿಂದಸಿಂಗ್ ತುಂಬಾ ಪ್ರಭಾವಶಾಲಿ. ಮೊಗಲರಿಗೆ ಅದರಲ್ಲೂ ಔರಂಗಜೇಬನಿಗೆ ಆತನ ಹೆಸರೆಂದರೆ ಹೆದರಿಕೆ. ಅವರಿಬ್ಬರಿಗೆ ಅಪಾರ ವೈರತ್ವ. ದ್ವೇಷ ಕ್ರಮೇಣ ಬೆಳೆಯ ತೊಡಗಿತು. ಸಾಧ್ಯವಾದಾಗಲೆಲ್ಲಾ ಸಿಕ್ಕರೂ ಮೊಗಲರೂ ಹೋರಾಡುತ್ತಿದ್ದರು. ಔರಂಗಜೇಬನಿಗೆ ಕ್ರೋಧ ಕೆರಳಿತು.

ಸಿಕ್ಕರು ತಲೆ ಎತ್ತದಂತೆ ತುಳಿದುಹಾಕಿರೆಂದು ತನ್ನ ಸೇನಾಧಿಪತಿಗಳಿಗೆ ಆಜ್ಞೆ ಮಾಡಿದ.

ಒಂದುಸಲ ಸಿಕ್ಕರೊಂದಿಗೆ ಕೀರ್ತಿಪುರವೆಂಬ ಸ್ಥಳದಲ್ಲಿ ಮೊಗಲರು ಯುದ್ಧ ಮಾಡಬೇಕಾದ ಪ್ರಸಂಗ ಬಂತು.

ಯುದ್ಧಕ್ಕೆ ಪೂರ್ವ ಗುರುವಿನ ಬಳಿಗೆ ಮೊಗಲರು ರಾಯಭಾರ ಕಳುಹಿಸಿದರು.

'ನೀವು ಯಾರನ್ನು ಎದುರಿಸುತ್ತೀರೆಂದು ಮುಂದೆ ನಿಮಗೆ ಅನುಭವವಾಗುತ್ತದೆ. ಇದೇನು ಸಣ್ಣ ಪುಟ್ಟ ಸಾಮಂತರನ್ನು ಬೆದರಿಸಿದ ಹಾಗೆಂದು ಭಾವಿಸಬೇಡಿ. ಕುರಿಹೋಗಿ ಬೆಟ್ಟಕ್ಕೆ ಡಿಕ್ಕಿ ಹೊಡೆವಂತೆ ಆದೀತು ನಿಮ್ಮ ಗತಿ. ಈಗಲಾದರೂ ಜಗತ್ತಿನಲ್ಲಿ ವಿಜೇಯನಾಗಿರುವ ನಮ್ಮ ಪ್ರಭುವಿನ ಬಳಿಗೆ ಬಂದು ಕ್ಷಮಾಪಣೆ ಕೇಳಿ ಇಸ್ಲಾಂ ಮತ ಸೇರಿಕೊಳ್ಳಿ' ಎಂದು ಹೇಳಿದರು.

ರಾಯಭಾರಿ ಈ ಮಾತುಗಳನ್ನು ಹೇಳುತ್ತಿದ್ದಾಗ ಗುರುಗೋವಿಂದರ ಮಗ ಅಜೀತ್ ಅಲ್ಲಿದ್ದ.

'ಇನ್ನುಮೇಲೆ ಹೀಗೆ ಮನ ನೋಯಿಸುವ ಮತ್ತೊಂದು ಮಾತನ್ನು ನುಡಿದೆಯೆಂದರೆ ನಿನ್ನ ಗತಿ ಏನಾಗುವ್ವದೋ, ನೋಡಿಕೊ' ಎಂದು

ಸುಮಿತ್ರಾನಂದ, ಬೊಂಬಾಯಿ

ಕತ್ತಿಯನ್ನು ಒರೆಯಿಂದ ತೆಗೆದು ರಾಯಭಾರಿಯ ಕಡೆ ಝಳಪಿಸಿದ.

ರಾಯಭಾರಿ ಬೇರೇನೂ ಮಾತನಾಡಲಾರದೆ ಖಿನ್ನನಾಗಿ ಹಿಂತಿರುಗಿದ. ರಾಯಭಾರಿ ಅಜಿತನಾಡಿದ ಮಾತುಗಳನ್ನು ತನ್ನ ಸೇನಾಧಿಪತಿಗೆ ಅರುಹಿದ.

ಇದನ್ನು ಕೇಳಿ ಮೊಗಲರು ಉರಿದುಬಿದ್ದರು. ಇದುವರಿಗೆ ಕೆರಳಿದ್ದ ಸೇಣಸಾಟಕ್ಕೆ ಈ ಪ್ರಸಂಗದಿಂದ ಬೆಂಕಿಯಲ್ಲಿ ತುಪ್ಪ ಸುರಿದಂತಾಯಿತು.

ಈ ಉಭಯ ಪಕ್ಷಗಳಿಗೂ ಪ್ರಬಲವಾದ ವೈರತ್ವ ಮತ್ತಷ್ಟು ಬಲವಾಯಿತು.

ಇನ್ನು ಸ್ವಲ್ಪಕಾಲಾನಂತರ ಆನಂದಪುರದ ಬಳಿ ಘೋರವಾದ ಯುದ್ಧ ನಡೆಯಿತು. ಮೊಗಲರ ಸೇನೆಯ ಹೊಡೆತ ಜೋರಾಯಿತು. ಶತ್ರುಗಳ ಪೆಟ್ಟನ್ನು ತಾಳಲಾರದೆ ಹೋದರು ಸಿಕ್‌ವೀರರು. ಮೊಗಲರು ಆ ಕೋಟೆಯನ್ನು ವಶಪಡಿಸಿಕೊಂಡರು.

ಆ ಸಮಯದಲ್ಲಿ ಗುರುಗೋವಿಂದರ ತಾಯಿ ಗುಜರಿ ತನ್ನ ಮೊಮ್ಮಕ್ಕಳಿಬ್ಬರನ್ನೂ ಹಿಂದೆಕಟ್ಟಿಕೊಂಡು ತಪ್ಪಿಸಿಕೊಂಡು ಸಿರ್‌ಹಿಂದ್ ಎಂಬ ಪಕ್ಕದ ಪ್ರದೇಶವನ್ನು ಸೇರಿದಳು.

ಆಕೆ ಅಲ್ಲಿಗೆ ತಲುಪಿರಬಹುದು; ಶತ್ರುಗಳು ಮಾತ್ರ ಅವರ ಬೆನ್ನಟ್ಟುವುದನ್ನು ಬಿಡಲಿಲ್ಲ. ಮೊಗಲರು ಗುಜರಿ ಮತ್ತು ಆಕೆಯ ಮೊಮ್ಮಕ್ಕಳನ್ನು ಹುಡುಕಿಸಿ ಸೆರೆಹಿಡಿದು ಆ ಪರಗ




ಣಕ್ಕೆ ಅಧಿಪತಿಯಾದ ವಜೀರ್‌ಖಾನ್ ಎದುರಿನಲ್ಲಿ ನಿಲ್ಲಿಸಿದರು.

ಒಂದು ದಿವಸ ವಜೀರ್‌ಖಾನನು ಆ ಬಾಲಕರೊಂದಿಗೆ ಮಾತನಾಡುವಾಗ "ಎಲೈ ಹುಡುಗರಿರಾ, ನಿಮ್ಮನ್ನು ಬಿಟ್ಟುಬಿಡುತ್ತೇನೆಂದುಕೊಳ್ಳಿ. ಆಗ ನೀವೇನು ಮಾಡುತ್ತೀರಿ" ಎಂದು ತಮಾಷೆಯಾಗಿ ಕೇಳಿದ.

ಅದಕ್ಕೆ ಆ ಬಾಲಕರು "ಸೈನ್ಯ ಜಮಾವಣೆ ಮಾಡುತ್ತೇವೆ. ನಿನ್ನನ್ನು ಕೊಂದು ಹಾಕುತ್ತೇವೆ" ಎಂದು ತಡೆಬಡಿಸದೆ ಸಮಾಧಾನ ಹೇಳಿದರು. ಆ ಮಾತನ್ನು ಅಲ್ಲಿಗೇ ಮುಗಿಸಲಿಲ್ಲ ವಜೀರ್.

"ಮತ್ತೆ ನೀವು ಯುದ್ಧದಲ್ಲಿ ಸೋತರೇ?" ಎಂದು ಮರುಪ್ರಶ್ನೆ ಹಾಕಿದ.




"ಏನು, ಇಸ್ಲಾಂ ಮತಕ್ಕೆ ಸೇರುತ್ತೀರಾ ಇಲ್ಲ, ಪ್ರಾಣಗಳನ್ನು ಕಳೆದುಕೊಳ್ಳುತ್ತೀರಾ ಹೇಳಿ" ಎಂದು ಕೇಳಿದರು.

ವೀರ ಸಿಂಹಗಳಂತೆ ಆ ಬಾಲಕರಿಬ್ಬರೂ ಏಕಕಂಠದಿಂದ "ಪ್ರಾಣಗಳನ್ನು ನೀಗುತ್ತೇವೆ" ಎಂದು ತಮ್ಮ ವಜ್ರಸಂಕಲ್ಪವನ್ನು ತಿಳಿಸಿದರು. ಅದನ್ನು ಕೇಳಿ ಎಲ್ಲರೂ ಆಶ್ಚರ್ಯ ಚಕಿತ ರಾದರು.

ಉಲೇಮಾನ ಆಜ್ಞೆಯ ಪ್ರಕಾರ ಆ ಬಾಲಕರನ್ನು ಭಾರಿ ಗೋಡೆ ಯೊಳಗೆ ನಿಲ್ಲಿಸಿ, ಸಮಾಧಿಮಾಡಲು ಸಿದ್ಧರಾದರು.

ಒಂದೊಂದು ವರಸೆ ಗೋಡೆ ಕಟ್ಟುವಾ ಗಲೂ 'ಈಗಲಾದರೂ ಇಸ್ಲಾಂಮತಕ್ಕೆ ಸೇರು ವಿರಾ' ಎಂದು ಆ ಕೆಲಸಗಾರರು ಕೇಳುತ್ತಲೇ ಇದ್ದರು.

ಆ ಬಾಲಕರು ಒಪ್ಪಲಿಲ್ಲ.

ಕಟ್ಟಕಡೆಯ ಇಟ್ಟಿಗೆ ವರಸೆಯನ್ನು ಜೋಡಿಸುವಾಗಲೂ ಕೊನೆಯಬಾರಿ ಕೆಲಸ ಗಾರರು ವಿಚಾರಿಸಿದರು. ಅವರ ನಿರ್ಧಾರ ಚಲಿಸಲಿಲ್ಲ.

ಮೊಗಲರು ಆ ಹುಡುಗರನ್ನು ಸಜೀವ ವಾಗಿ ಸಮಾಧಿ ಮಾಡಿದರು. ಈ ರೀತಿ ಬಾಲಕರಿಬ್ಬರೂ ಆತ್ಮಾರ್ಪಣೆಮಾಡಿ ತಮ್ಮ ವಂಶದ ಮರ್ಯಾದೆ, ಸಿಕ್‌ಮತಸ್ಥರ ಗೌರವ ಗಳನ್ನು ಉಳಿಸಿ ಹುತಾತ್ಮರಾದರು.

"ನಿನ್ನನ್ನು ಕೊಲ್ಲುವತನಕ ನಿದ್ದೆ ಮಾಡೆವು. ಹೋರಾಡುತ್ತಲೇ ಇರುತ್ತೇವೆ" ಎಂದು ಪ್ರತ್ಯುತ್ತರ ಹೇಳಿದರು ತುಸವಾದರೂ ಹಿಂದು ಮುಂದೆ ನೋಡದೆ.

ಹುಡುಗರ ಪೌರುಷ ಮತ್ತು ಛಲಗಳಿಗೆ ವಜೀರ್ ಬೆಕ್ಕಸಬೆರಗಾದ.

ಈ ವರ್ತಮಾನ ತಿಳಿದ ಕೂಡಲೇ ಮತ ಗುರುವಾದ ಉಲೇಮಾ ಹಾಜರಾದ.

ಬಂದವನೇ ವಿಚಾರಣೆ ಮಾಡಿ ಹುಡುಗ ರಿಬ್ಬರಿಗೂ ಮರಣಶಿಕ್ಷೆ ವಿಧಿಸಿದ. ಇಸ್ಲಾಂ ಮತಕ್ಕೆ ಸೇರಿದರೆ ಕ್ಷಮಿಸುವುದಾಗಿ ತಿಳಿಸಿದ.

ಉಲೇಮಾನ ತೀರ್ಮಾನವನ್ನು ಹುಡು ಗರಿಗೆ ತಿಳಿಸಿ